# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 822

ಸದಸ್ಯರ ಹೆಸರು : ಶ್ರೀ ಎಸ್. ನಾಗರಾಜ್ (ಸಂದೇಶ್ ನಾಗರಾಜ್)

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 25-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಮೈಸೂರಿನಿಂದ ತಿ.ನರಸೀಪುರ, ಮೂಗೂರು, ಸಂತೇಮರಹಳ್ಳಿ ಮೂಲಕ ಚಾಮರಾಜನಗರಕ್ಕೆ ಹೆಚ್ಚಿನ ಸಾರಿಗೆ ಬಸ್ ಸೌಲಭ್ಯ ಇಲ್ಲದೆ ಸಾರ್ವಜನಿಕರು, ವಿದ್ಯಾರ್ಥಿಗಳು, ಸರ್ಕಾರಿ ನೌಕರರುಗಳಿಗೆ ಅನಾನುಕೂಲ ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮೈಸೂರಿನಿಂದ ತಿ.ನರಸೀಪುರ, ಮೂಗೂರು, ಸಂತೇಮರಹಳ್ಳಿ ಮಾರ್ಗವಾಗಿ ಚಾಮರಾಜನಗರಕ್ಕೆ ಬೆಳಿಗ್ಗೆ 5:45ರಿಂದ ರಾತ್ರಿ 8:00 ಗಂಟೆವರೆಗೆ ಪ್ರತಿ ಅರ್ಧ ಗಂಟೆಗೆ ಒಂದು ಸಾರಿಗೆಯಂತೆ 44 ದುಂಡು ಸುತ್ತುವಳಿಗಳ ಸಾರಿಗೆ ಸೌಲಭ್ಯ ಕಲ್ಪಿಸಲಾಗಿರುತ್ತದೆ. ಸದರಿ ಸಾರಿಗೆಗಳ ವಿವರಗಳನ್ನು <u>ಅನುಬಂಧ-1</u>ರಲ್ಲಿರಿಸಿದೆ. |
| ಆ. | ಈಗ ಹೆಚ್ಚಿನ ಸಾರಿಗೆ ಸಂಸ್ಥೆ ಬಸ್‌ಗಳು, ಮೈಸೂರು ನಂಜನಗೂಡು ಮೂಲಕ ಚಾಮರಾಜನಗರಕ್ಕೆ ಸಂಚರಿಸುತ್ತಿದ್ದು, ಸಂತೇಮರಹಳ್ಳಿ ಮೂಲಕವೂ ಹೆಚ್ಚಿನ ಸಾರಿಗೆ ಸಂಸ್ಥೆ ಬಸ್‌ಗಳನ್ನು ಓಡಿಸಲು ಕ್ರಮ ತೆಗೆದುಕೊಳ್ಳಲಾಗುವುದೇ; ಅದರಲ್ಲೂ ಮುಖ್ಯವಾಗಿ ಬೆಳಗ್ಗೆ ಹಾಗೂ ಸಂಜೆ ವೇಳೆ ಈ ಮಾರ್ಗದಲ್ಲಿ ಹೆಚ್ಚಿನ ಬಸ್ ಸೌಲಭ್ಯ ಕಲ್ಪಿಸಲಾಗುವುದೇ? | ಮೈಸೂರಿನಿಂದ ತಿ.ನರಸೀಪುರ, ಮೂಗೂರು, ಸಂತೇಮರಹಳ್ಳಿ ಮಾರ್ಗವಾಗಿ ಯಳಂದೂರಿಗೆ ಬೆಳಿಗ್ಗೆ 7:45ರಿಂದ ರಾತ್ರಿ 9:00 ಗಂಟೆವರೆಗೆ 23 ದುಂಡು ಸುತ್ತುವಳಿಗಳ ಸಾರಿಗೆ ಸೌಲಭ್ಯ ಕಲ್ಪಿಸಲಾಗಿರುತ್ತದೆ. ಸದರಿ ಸಾರಿಗೆಗಳ ವಿವರಗಳನ್ನು <u>ಅನುಬಂಧ-2</u>ರಲ್ಲಿರಿಸಿದೆ.<br><br>ಪ್ರಸ್ತುತ ಕಾರ್ಯಾಚರಣೆ ಮಾಡುತ್ತಿರುವ ಸಾರಿಗೆಗಳು ಆ ಭಾಗದ ಅವಶ್ಯಕತೆಗೆ ಅನುಗುಣವಾಗಿರುತ್ತವೆ. |

ಸಂಖ್ಯೆ: ಟಿಡಿ 158 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು